# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 328 |
| ಸದಸ್ಯರ ಹೆಸರು | : | ಶ್ರೀ ಸಲೀಂ ಅಹಮದ್ |
| ಉತ್ತರಿಸುವ ದಿನಾಂಕ | : | 18-02-2022 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳಿಗಾಗಿ ಶಾಸಕರ ಕ್ಷೇತ್ರಗಳಿಗೆ, ಬಿಡುಗಡೆ ಮಾಡುವ ಅನುದಾನದಲ್ಲಿ ತಾರತಮ್ಯ ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2011 ರ ಜನಗಣತಿಯಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಅನುದಾನದ ಲಭ್ಯತೆಯ ಅನುಗುಣವಾಗಿ ಹಂಚಿಕೆ ಮಾಡಲಾಗುತ್ತಿದೆ. ಯಾವುದೇ ತಾರತಮ್ಯ ಮಾಡಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | |
| ಇ) | ಕಳೆದ ಮೂರು ವರ್ಷಗಳಲ್ಲಿ ಪ್ರತಿ ಶಾಸಕ ಕ್ಷೇತ್ರಗಳಿಗೆ ಬಿಡುಗಡೆಯಾಗಿರುವ ಅನುದಾನ ಎಷ್ಟು? (ವಿವರಗಳನ್ನು ನೀಡುವುದು) | 2018-19 ರಿಂದ 2020-21ನೇ ಸಾಲಿನವರೆಗೆ ಪ್ರಗತಿ ಕಾಲೋನಿ ಯೋಜನೆಯಡಿ **ಪರಿಶಿಷ್ಟ ಜಾತಿಯ** ಕಾಲೋನಿಗಳ ಅಭಿವೃದ್ಧಿಗೆ ವಿಧಾನ ಪರಿಷತ್ ಸದಸ್ಯರ ಕ್ಷೇತ್ರಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು **ಅನುಬಂಧ-1ರಲ್ಲಿ** ಹಾಗೂ ವಿಧಾನಸಭಾ ಕ್ಷೇತ್ರಗಳಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು **ಅನುಬಂಧ-2ರಲ್ಲಿ** ಒದಗಿಸಲಾಗಿದೆ.<br><br>2018-19, 2019-20, ಹಾಗೂ 2020-21 ನೇ ಸಾಲಿನಲ್ಲಿ "ಪ್ರಗತಿ ಕಾಲೋನಿ" ಯೋಜನೆಯಡಿ **ಪರಿಶಿಷ್ಟ ಪಂಗಡದ** ಜನರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿರುವ ಕಾಲೋನಿಗಳನ್ನು ಅಭಿವೃದ್ಧಿಪಡಿಸಲು ಮಂಜೂರು ಮಾಡಿ, ಬಿಡುಗಡೆ ಮಾಡಲಾದ ಅನುದಾನ ವಿವರ ಈ ಕೆಳಕಂಡಂತಿದೆ. (ವಿಧಾನಸಭಾ ಕ್ಷೇತ್ರವಾರು ಮಾಹಿತಿಯನ್ನು ಅನುಬಂಧ-3 ರಲ್ಲಿ ನೀಡಿದೆ.<br><br>(ರೂ.ಲಕ್ಷಗಳಲ್ಲಿ) |

| ಕ್ರ.ಸಂ | ವರ್ಷ | ಮಂಜೂರು ಮಾಡಿದ ಮೊತ್ತ | ಬಿಡುಗಡೆ ಮಾಡಿದ ಮೊತ್ತ |
|---|---|---|---|
| 1 | 2018-19 | 15641.00 | 15089.75 |
| 2 | 2019-20 | 12300.80 | 6274.84 |
| 3 | 2020-21 | 11720.00 | 3957.58 |
| | ಒಟ್ಟು | 39661.80 | 25322.17 |

ಸಕಇ 139 ಎಸ್‌ಎಲ್‌ಪಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು